# ಕರ್ನಾಟಕ ವಿಧಾನ ಪರಿಷತ್

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 21 (143)
**ಸದಸ್ಯರ ಹೆಸರು** : ಶ್ರೀ ಆರ್. ಧರ್ಮಸೇನ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು)
**ಉತ್ತರಿಸಬೇಕಾದ ದಿನಾಂಕ** : 13-12-2021
**ಉತ್ತರಿಸುವ ಸಚಿವರು** : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಇತ್ತೀಚೆಗೆ ಖಾಸಗಿ ಶಾಲೆಗಳಿಗಿಂತ ಸರ್ಕಾರಿ ಶಾಲೆಗಳಿಗೆ ತಮ್ಮ ಮಕ್ಕಳನ್ನು ಸೇರಿಸಲು ಪೋಷಕರು ಆಸಕ್ತಿ ವಹಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ; | ಬಂದಿದೆ |
| ಆ. | ಬಂದಿದ್ದಲ್ಲಿ ಸರ್ಕಾರಿ ಶಾಲೆಗಳ ಗುಣಮಟ್ಟವನ್ನು ಹೆಚ್ಚಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | • 2019-20 ಹಾಗೂ 2020-21ನೇ ಸಾಲುಗಳಲ್ಲಿ 2400 ಶಾಲೆಗಳಲ್ಲಿ ಹಾಲಿ ಇರುವ ಕನ್ನಡ ಮಾಧ್ಯಮದ ಜೊತೆಗೆ ದ್ವಿಭಾಷಾ ಮಾದರಿಯಲ್ಲಿ (ಕನ್ನಡ-ಆಂಗ್ಲ ಮತ್ತು ಉರ್ದು-ಆಂಗ್ಲ) ತರಗತಿಗಳನ್ನು ಪ್ರಾರಂಭಿಸಲಾಗಿದೆ. ಸದರಿ ಶಾಲೆಗಳಲ್ಲಿ ತರಗತಿಗಳನ್ನು ನಿರ್ವಹಿಸಲು ಎಲ್ಲಾ ಶಿಕ್ಷಕರಿಗೆ EMTIP (English Medium Teachers Induction Programme) ತರಬೇತಿಯನ್ನು ಹಂತ ಹಂತವಾಗಿ(ತರಗತಿ 1,2,3) ನೀಡಲಾಗಿದೆ. ಈ ತರಗತಿಗಳಲ್ಲಿ ಸಮರ್ಪಕವಾಗಿ ಕಲಿಕೆಯನ್ನು ನಿರ್ವಹಿಸಲು ಶಿಕ್ಷಕರಿಗೆ ಕೈಪಿಡಿ, ಪಾಠೋಪಕರಣಗಳು ಹಾಗೂ ಮಾರ್ಗದರ್ಶನವನ್ನು ಸತತವಾಗಿ ನೀಡಲಾಗುತ್ತಿದೆ.<br>• 2021-22ನೇ ಸಾಲಿನಲ್ಲಿ 9 ಮತ್ತು 10ನೇ ತರಗತಿಯನ್ನು ಬೋಧಿಸುತ್ತಿರುವ 59,105 ಪ್ರೌಢ ಶಾಲಾ ಶಿಕ್ಷಕರಿಗೆ DSERT ವತಿಯಿಂದ ಆನ್‌ಲೈನ್ ಮೂಲಕ ನಿಷ್ಠಾ 2.0 ತರಬೇತಿಯನ್ನು ನೀಡಲಾಗುತ್ತಿದೆ.<br>• 2021-22ನೇ ಸಾಲಿನಲ್ಲಿ 1 ರಿಂದ 5ನೇ ತರಗತಿ ಬೋಧಿಸುತ್ತಿರುವ 65,430 ಪ್ರಾಥಮಿಕ ಶಾಲಾ ಶಿಕ್ಷಕರಿಗೆ DSERT ವತಿಯಿಂದ ಆನ್‌ಲೈನ್ ಮೂಲಕ ನಿಷ್ಠಾ 3.0(ಮೂಲ ಭಾಷಾ ಹಾಗೂ ಸಂಖ್ಯಾಜ್ಞಾನ – FLN) ತರಬೇತಿಯನ್ನು ನೀಡಲಾಗುತ್ತಿದೆ.<br>• ವಿದ್ಯಾರ್ಥಿಗಳ ಕಲಿಕೆಗೆ ಅನುಕೂಲವಾಗುವಂತೆ ಪರ್ಯಾಯ ಶೈಕ್ಷಣಿಕ ಯೋಜನೆಯನ್ನು ಇಲಾಖೆಯಿಂದ ಶಿಕ್ಷಕರಿಗೆ ನೀಡಲಾಗಿದೆ.<br>• ಮಕ್ಕಳಿಗೆ ಓದುವ ಹವ್ಯಾಸವನ್ನು ಉತ್ತಮ ಪಡಿಸಲು ರಾಜ್ಯದ 9008 ಸರ್ಕಾರಿ ಪ್ರಾಥಮಿಕ ಶಾಲೆಗಳಿಗೆ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.<br>• ವಿದ್ಯಾರ್ಥಿಗಳಿಗೆ ಆನ್‌ಲೈನ್ ಬೋಧನೆಯನ್ನು |

| | | |
|---|---|---|
| | | ಕೈಗೊಳ್ಳಲಾಗಿದೆ.<br>• 2018-19ನೇ ಸಾಲಿನಲ್ಲಿ ರಾಜ್ಯದ ಎಲ್ಲಾ ಜಿಲ್ಲೆಗಳಿಂದ ಆಯ್ದ ಪ್ರೌಢ ಶಾಲೆಗಳಿಗೆ 2681 ಗಣಿತ ಕಿಟ್‌ಗಳನ್ನು ಸರಬರಾಜು ಮಾಡಲಾಗಿದೆ.<br>• ಕೆ.ಪಿ.ಎಸ್. ಶಾಲೆಗಳಲ್ಲಿನ ಮೂಲಭೂತ ಸೌಲಭ್ಯವೃದ್ಧಿಗಾಗಿ 2020-21ನೇ ಸಾಲಿನಲ್ಲಿ 50 ಶಾಲೆಗಳು ಮತ್ತು 2021-22ನೇ ಸಾಲಿಗೆ 50 ಶಾಲೆಗಳಿಗೆ ತಲಾ 2 ಕೋಟಿ ರೂಗಳನ್ನು ಬಿಡುಗಡೆ ಮಾಡಲಾಗಿದೆ ಮತ್ತು ಕಾಮಗಾರಿಗಳು ಪ್ರಗತಿಯಲ್ಲಿದೆ.<br>• ಟ್ಯಾಲ್ಸ್ ಯೋಜನೆಯಡಿ 4687 ಸರ್ಕಾರಿ ಪ್ರೌಡ ಶಾಲೆಗಳಿಗೆ ಲ್ಯಾಪ್‌ಟಾಪ್ ಮತ್ತು ಪ್ರೊಜೆಕ್ಟರ್‌ಗಳನ್ನು ಹಾಗೂ 3218 ಸರ್ಕಾರಿ ಪ್ರೌಢ ಶಾಲೆಗಳಿಗೆ ಕಂಪ್ಯೂಟರ್‌ಗಳನ್ನು ಒದಗಿಸಲಾಗಿದೆ.<br>• DSERT ವತಿಯಿಂದ ಟ್ಯಾಲ್ಸ್ ಯೋಜನೆಯಡಿ ಸರ್ಕಾರಿ ಪ್ರೌಢ ಶಾಲಾ ಶಿಕ್ಷಕರಿಗೆ ತರಬೇತಿ ನೀಡಲಾಗುತ್ತಿದೆ. ಹಾಗೂ ಪ್ರೌಢ ಶಾಲಾ ಹಂತದಲ್ಲಿ ಶಿಕ್ಷಕರ ಅಗತ್ಯತೆ ಆಧರಿಸಿ ತರಬೇತಿಯೊಂದಿಗೆ ತಂತ್ರಜ್ಞಾನ ಆಧಾರಿತ ಕೌಶಲ್ಯಕ್ಕೆ ಒತ್ತುನೀಡಲಾಗಿದೆ.<br>• DSERT ವತಿಯಿಂದ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳ ಎಸ್.ಡಿ.ಎಂ.ಸಿ. ಸದಸ್ಯರಿಗೆ ತರಬೇತಿ ನೀಡಲಾಗುತ್ತಿದೆ. |
| ಇ. | ಅನೇಕ ಸರ್ಕಾರಿ ಶಾಲೆಗಳು ಹಳೆಯ ಶಿಥಿಲವಾದ ಕಟ್ಟಡಗಳಲ್ಲಿ ನಡೆಯುತ್ತಿದ್ದು ಇದರಿಂದ ಮಕ್ಕಳು ಮತ್ತು ಉಪಾಧ್ಯಾಯರು ಅಪಾಯದ ಸ್ಥಿತಿಯಲ್ಲಿರುವುದರಿಂದ ಇದರ ದುರಸ್ತಿ ಕಾರ್ಯವನ್ನು ಸಮರೋಪಾದಿಯಲ್ಲಿ ಮಾಡಲು ಕ್ರಮ ಕೈಗೊಳ್ಳಲಾಗುವುದೇ; | 2021-22ನೇ ಸಾಲಿನಲ್ಲಿ ಈ ಕೆಳಕಂಡ ಯೋಜನೆಗಳಡಿ ಶಿಥಿಲಾವಸ್ಥೆಯಲ್ಲಿರುವ ಶಾಲೆಗಳನ್ನು ದುರಸ್ತಿ ಮಾಡಲು ಕ್ರಮಕೈಗೊಳ್ಳಲಾಗುತ್ತಿದೆ.<br>1. ರಾಜ್ಯವಲಯ ಮುಂದುವರೆದ ಯೋಜನೆಯಡಿ.<br>2. ವಿಶೇಷ ಅಭಿವೃದ್ಧಿ ಯೋಜನೆಯಡಿ (SDP)<br>3. ಗ್ರಾಮೀಣ ಮೂಲ ಸೌಕರ್ಯಾಭಿವೃದ್ಧಿ ನಿಧಿಯಡಿ.<br>4. ಅನುಸೂಚಿತ ಜಾತಿಗಳ ಉಪಹಂಚಿಕೆ ಮತ್ತು ಬುಡಕಟ್ಟು ಉಪಹಂಚಿಕೆಯಡಿ.<br>5. ನರೇಗಾ ಒಗ್ಗೂಡಿಸುವಿಕೆ ಮೂಲಕ.<br>6. ಜಿಲ್ಲಾ ವಿಪತ್ತು ನಿರ್ವಹಣೆ ನಿಧಿಯಡಿ ಸರ್ಕಾರಿ ಶಾಲಾ ಕಟ್ಟಡಗಳ ದುರಸ್ತಿ ಮಾಡಲಾಗುತ್ತಿದೆ. |
| ಈ. | ಸರ್ಕಾರಿ ಶಾಲೆಗಳಲ್ಲಿ ಉಪಾಧ್ಯಾಯರ ಕೊರತೆ ಇಲ್ಲದಂತೆ ಉತ್ತಮ ಉಪಾಧ್ಯಾಯರ ನೇಮಕಾತಿಗಳನ್ನು ಮಾಡಲಾಗುವುದೇ? (ಯಾವ ಕಾಲಮಿತಿಯಲ್ಲಿ ಮಾಡಲಾಗುವುದು) | ಮಾನ್ಯ ಮುಖ್ಯಮಂತ್ರಿಗಳು ಘೋಷಿಸಿರುವ 5000 ಹುದ್ದೆಗಳ ನೇಮಕಾತಿ ಬಗ್ಗೆ ಆರ್ಥಿಕ ಇಲಾಖೆಯು ಅನುಮೋದನೆ ನೀಡಿದ್ದು, ಶೀಘ್ರ ಅಧಿಸೂಚನೆ ಹೊರಡಿಸಲು ಕ್ರಮವಹಿಸಲಾಗುವುದು. ಉಳಿದ 20,813 ಹುದ್ದೆಗಳನ್ನು (ಕಲ್ಯಾಣ ಕರ್ನಾಟಕದ 6,129 ಹಾಗೂ ಇನ್ನಿತರೆ ಜಿಲ್ಲೆಗಳ 14684) ಭರ್ತಿ ಮಾಡುವ ಸಂಬಂಧ ಪ್ರಸ್ತಾವನೆಯು ಆರ್ಥಿಕ ಇಲಾಖೆಯ ಪರಿಶೀಲನೆಯಲ್ಲಿದೆ. |

| | | |
|---|---|---|
| | | ಸರ್ಕಾರಿ ಪ್ರೌಢ ಶಾಲೆಗಳಲ್ಲಿ ಒಟ್ಟು ಖಾಲಿ ಇರುವ 5500 (ಕಲ್ಯಾಣ ಕರ್ನಾಟಕದ 1,762 ಇನ್ನಿತರೆ ಜಿಲ್ಲೆಗಳ 3,738 ಹುದ್ದೆಗಳು) ಹುದ್ದೆಗಳನ್ನು ಭರ್ತಿ ಮಾಡುವ ಸಂಬಂಧ ಆರ್ಥಿಕ ಇಲಾಖೆಯ ಪರಿಶೀಲನೆಯಲ್ಲಿದೆ. |

**ಸಂಖ್ಯೆ**: ಇಪಿ 47 ಪಿಎಂಎ 2021

(ಬಿ.ಸಿ. ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ
ಹಾಗೂ ಸಕಾಲ ಸಚಿವರು.